# ಶಂಕರಾಚಾರ್ಯ ವಿರಚಿತ ದಶಶ್ಲೋಕೀ

ಮತ್ತು

ಮಹಾಮಹೋಪಾಧ್ಯಾಯ, ವಿದ್ಯಾವಾಚಸ್ಪತಿ
**ವಿದ್ವಾನ್ ರಂಗನಾಥ ಶರ್ಮಾ**
ವಿರಚಿತ

# ಶ್ರೀ ಶಂಕರ ಭಗವತ್ಪಾದ ಸ್ತುತಿಃ



# ಶಂಕರಾಚಾರ್ಯ ವಿರಚಿತ ದಶಶ್ಲೋಕೀ

ಮತ್ತು

ಮಹಾಮಹೋಪಾಧ್ಯಾಯ, ವಿದ್ಯಾವಾಚಸ್ಪತಿ
**ವಿದ್ವಾನ್ ರಂಗನಾಥ ಶರ್ಮಾ**

*ವಿರಚಿತ*

# ಶ್ರೀ ಶಂಕರ ಭಗವತ್ಪಾದ ಸ್ತುತಿಃ




**ಉದಯ ಪ್ರಕಾಶನ**
ಬೆಂಗಳೂರು – 10

**Shree Shankarabhagavatpaadastutihi** - **Written by Vidwan** N. Ranganathasharma, Published by Udaya Prakashana, No. 984, 11th Main, 3rd Block, Rajajinagar, Bangalore, Karnataka - 560 010

Page : 32

Price : Rs. 6/-

First Edition : 2001 Copies : 5,000
Second Edition : 2006 Copies : 10,000

Printed at
**ILA Mudrana**
No. 36, 40 Ft. Road
New Timberyard Layout
Raghava Nagar, Bangalore - 26
✆ : 26757159 / 32715773

# ನಿವೇದನೆ

ಶ್ರೀಶೃಂಗೇರಿಕ್ಷೇತ್ರದಲ್ಲಿ ಶ್ರೀಸದ್ವಿದ್ಯಾಸಂಜೀವಿನೀ ಸಂಸ್ಕೃತ ಮಹಾಪಾಠಶಾಲೆಯ ಶತಾಬ್ದೀಮಹೋತ್ಸವವು ವಿಜೃಂಭಣೆಯಿಂದ ನಡೆಯಿತು. ಅದರ ಅಂಗವಾಗಿ ದಿನಾಂಕ 2-2-1996 ರಂದು ಸಂಸ್ಕೃತಕವಿಸಂಮೇಲನವನ್ನು ಏರ್ಪಡಿಸಲಾಗಿತ್ತು.

ಆಗ ಪರಮಪೂಜ್ಯ ಶ್ರೀ ಜಗದ್ಗುರು ಭಾರತೀತೀರ್ಥ ಮಹಾಸ್ವಾಮಿಗಳ ದಿವ್ಯ ಸಾಂನಿಧ್ಯದಲ್ಲಿ ವಾಚಿಸಿದ ನನ್ನ ಕವಿತೆಗಳಲ್ಲಿ ಶ್ರೀ ಶಂಕರ ಭಗವತ್ಪಾದಸ್ತುತಿಯ ಕೆಲವು ಶ್ಲೋಕಗಳಿದ್ದವು. ಶ್ರೀ ಜಗದ್ಗುರು ಮಹಾಸ್ವಾಮಿಗಳು ತಮ್ಮ ಮೆಚ್ಚುಗೆಯನ್ನು ಸೂಚಿಸಿದ್ದರಿಂದ ಈ ಸ್ತುತಿಯನ್ನು ಪೂರ್ತಿಯಾಗಿ ಪ್ರಕಟಿಸಬೇಕೆಂದು ಕೆಲವು ಮಹಾ ಜನರು ನನಗೆ ಹೇಳಿದರು. ಅಂತೆಯೇ ನನಗೆ ಆಪ್ತರಾದ ಉದಯ ಪ್ರಕಾಶನದ ಶ್ರೀ ಮ.ಸು. ಶ್ರೀನಿವಾಸರಾಯರು ಭಕ್ತಿಪೂರ್ವಕವಾಗಿ ಈ ಸ್ತುತಿಯನ್ನು ಪ್ರಕಟಿಸಿದ್ದಾರೆ. ಅವರಿಗೆ ನನ್ನ ವಂದನೆಗಳು ಸಲ್ಲುತ್ತವೆ.

*ಎನ್. ರಂಗನಾಥಶರ್ಮಾ*

# ದ್ವಿತೀಯ ಮುದ್ರಣ

ಮೊದಲನೆಯ ಮುದ್ರಣದ ಪ್ರತಿಗಳೆಲ್ಲವೂ ಖರ್ಚಾದವು. ಆಚಾರ್ಯ ಭಕ್ತರಾದ ಕೆಲವರು ಈ ಸ್ತೋತ್ರಕ್ಕೆ ಕನ್ನಡದಲ್ಲಿ ಅರ್ಥವೂ ಇರಬೇಕಾಗಿತ್ತೆಂದು ಹೇಳಿದ್ದರು. ಆದ್ದರಿಂದ ಇದರ ಕನ್ನಡ ಅನುವಾದವನ್ನು ವಿದ್ವಾನ್ ಅನಂತಶರ್ಮಾ ಭುವನಗಿರಿ ಯವರು ವಿಶ್ವಾಸದಿಂದ ಬರೆದುಕೊಟ್ಟಿದ್ದಾರೆ. ಉದಯ ಪ್ರಕಾಶನದ ಶ್ರೀ ಮ.ಸು. ಶ್ರೀನಿವಾಸರಾಯರು ಎಂದಿನಂತೆ ಇದನ್ನು ಸಂತೋಷದಿಂದ ಮುದ್ರಿಸಿ ಪ್ರಕಟಿಸಿದ್ದಾರೆ. ಈ ಇಬ್ಬರು ಮಹನೀಯರಿಗೂ ನನ್ನ ಕೃತಜ್ಞತೆಯ ವಂದನೆಗಳು ಸಲ್ಲುತ್ತವೆ.

ಶ್ರೀ ಶಂಕರ ಭಗವತ್ಪಾದರು ರಚಿಸಿದ ದಶಶ್ಲೋಕೀ ಎಂಬ ಹತ್ತು ಶ್ಲೋಕಗಳನ್ನು ಈಗ ಹೊಸದಾಗಿ ಸೇರಿಸಲಾಗಿದೆ.

ಬೆಂಗಳೂರು
೨೬-೫-೨೦೦೫

*ಎನ್. ರಂಗನಾಥಶರ್ಮಾ*

# ಶ್ರೀಶಂಕರಾಚಾರ್ಯರು

ಕೇರಳರಾಜ್ಯದಲ್ಲಿರುವ ಕಾಲಟಿ ಎಂಬ ಗ್ರಾಮವು ಆಚಾರ್ಯರ ಜನ್ಮಸ್ಥಳ. ಇವರ ತಂದೆ ಶಿವಗುರು ಎಂಬ ವಿದ್ವಾಂಸರು. ತಾಯಿ ಆರ್ಯಾಂಬೆ. ಆಚಾರ್ಯರರ ಜನನವಾದದ್ದು ವೈಶಾಖ ಶುದ್ಧಪಂಚಮೀ. ಕಾಲ ಕ್ರಿ. ಶ. ೭ನೆಯ ಶತಮಾನದ ಅಂತ್ಯಭಾಗ. ಇಂದಿಗೆ ಸುಮಾರು ೧೩೦೦ ವರ್ಷಗಳ ಹಿಂದೆ ಅವರು ಇದ್ದರೆಂದು ಹೇಳಬಹುದು.

ಶ್ರೀಶಂಕರರು ತಮ್ಮ ನಿಶಿತವಾದ ಬುದ್ಧಿಶಕ್ತಿಯಿಂದ ಬಾಲ್ಯದಲ್ಲಿಯೇ ವೇದಗಳನ್ನೂ ತರ್ಕವ್ಯಾಕರಣಾದಿ ಶಾಸ್ತ್ರಗಳನ್ನೂ ಅಭ್ಯಾಸಮಾಡಿ ಅವುಗಳಲ್ಲಿ ಪಾರಂಗತರಾದರು. ಅನಂತರ ಶ್ರೀಗೋವಿಂದ ಭಗವತ್ಪಾದರ ಶಿಷ್ಯರಾಗಿ ಸಂನ್ಯಾಸವನ್ನು ಸ್ವೀಕರಿಸಿ ವೇದಾಂತಶಾಸ್ತ್ರದಲ್ಲಿ ನಿಷ್ಣಾತರಾದರು. ಗುರುಗಳ ಆಜ್ಞೆಯಂತೆ ಕಾಶಿಗೆ ಹೋಗಿ ಬ್ರಹ್ಮಸೂತ್ರ, ಭಗವದ್ಗೀತೆ ಮತ್ತು ಉಪನಿಷತ್ತುಗಳಿಗೆ ಪ್ರೌಢವಾದ ಭಾಷ್ಯಗಳನ್ನು ರಚಿಸಿ ವಿಖ್ಯಾತರಾದರು. ಅವರ ಪಾಂಡಿತ್ಯವನ್ನು ಕೇಳಿ ಬಹಳ ಜನರು ಬಂದು ಆಚಾರ್ಯರ ಶಿಷ್ಯರಾದರು. ಅವರ ಶಿಷ್ಯರಲ್ಲಿ ಪದ್ಮಪಾದ, ಸುರೇಶ್ವರ, ಹಸ್ತಾಮಲಕ, ತೋಟಕ-ಎಂಬ ನಾಲ್ವರು ಪ್ರಸಿದ್ಧರು. ಆಚಾರ್ಯರು ಪ್ರತಿಪಾದಿಸಿದ್ದು ಅದ್ವೈತಸಿದ್ಧಾಂತ.

**ಅದ್ವೈತಸಿದ್ಧಾಂತ**

ಉಪನಿಷತ್ತುಗಳಿಗೆ ವೇದಾಂತವೆಂದು ಹೆಸರಿದೆ. ಆದ್ದರಿಂದ ಉಪನಿಷತ್ತುಗಳು ಪ್ರತಿಪಾದಿಸುವ ಅಧ್ಯಾತ್ಮಶಾಸ್ತ್ರ ವೇದಾಂತ ಶಾಸ್ತ್ರವೆಂದು ಪ್ರಸಿದ್ಧವಾಗಿದೆ. ನಾನು, ನಾನು ಎಂದು ಕೊಳ್ಳುವ ಜೀವ, ಸುತ್ತಮುತ್ತ ಕಾಣುವ ಜಗತ್ತು, ಇವುಗಳಿಗೆ ನಿಯಾಮಕನಾದ ಈಶ್ವರ ಈ ಮೂರು ವಸ್ತುಗಳ ವಿಚಾರವೇ ವೇದಾಂತದ ತಿರುಳು. ಈಶ್ವರನೆಂದರೆ ಪರಮಾತ್ಮ, ಪರಬ್ರಹ್ಮ. ಪರಬ್ರಹ್ಮ ಒಂದೇ ಪರಮಾರ್ಥವಾದ ಸತ್ಯ. ಜೀವನು ವಸ್ತುತಃ ಪರಬ್ರಹ್ಮವೇ ಆಗಿದ್ದಾನೆ. ಜಗತ್ತೆಲ್ಲವೂ ತೋರಿಕೆಯದು. ಲೋಕವ್ಯವಹಾರದಲ್ಲಿ ಜೀವ, ಜಗತ್ತುಗಳನ್ನು ಸತ್ಯವೆಂದೇ ತಿಳಿಯಬೇಕು. ಇದಕ್ಕೆ ವ್ಯಾವಹಾರಿಕ ಸತ್ಯ ಎನ್ನುತ್ತಾರೆ. ಪರಮಾರ್ಥದಲ್ಲಿಯೂ ಜೀವ, ಜಗತ್ತುಗಳು ಸತ್ಯ ಎನ್ನತಕ್ಕವರು ದ್ವೈತಿಗಳು. ಸಾಂಖ್ಯರು, ನೈಯಾಯಿಕರು ಮೊದಲಾದವರು ದ್ವೈತಿಗಳು. ಉಪನಿಷತ್ತುಗಳೆಲ್ಲವೂ ಅದ್ವೈತವನ್ನೇ ಪ್ರತಿಪಾದಿಸುತ್ತವೆಯೆಂದು ಶ್ರೀಶಂಕರಾಚಾರ್ಯರು ಹೇಳಿದ್ದಾರೆ. “ಸರ್ವೋಪನಿಷತ್ಸು ಹಿ ವಿಜ್ಞಾನಾತ್ಮನ: ಪರಮಾತ್ಮನಾ ಏಕತ್ವಪ್ರತ್ಯಯೋ ವಿಧೀಯತೆ ಇತ್ಯವಿಪ್ರತಿಪತ್ತಿ: ಸರ್ವೇಷಾಮುಪನಿಷದ್ವಾದಿನಾಮ್” ಎಂದು ಅವರು ಬರೆದಿದ್ದಾರೆ. ಸಕಲೋಪನಿಷತ್ತುಗಳಲ್ಲಿಯೂ ವಿಜ್ಞಾನಾತ್ಮನಾದ ಜೀವನಿಗೂ ಪರಮಾತ್ಮನಿಗೂ ಅಭೇದವೇ ಪ್ರತಿಪಾದಿತವಾಗಿದೆಯೆಂಬುದರಲ್ಲಿ ಸಮಸ್ತವೇದಾಂತಿಗಳಿಗೂ ಮತ

ಭೇದವೇನೂ ಇಲ್ಲ” ಎಂದು ಈ ವಾಕ್ಯದ ಅಭಿಪ್ರಾಯ. ವೇದಾಂತಿಗಳಲ್ಲಿಯೂ ಅನೇಕ ಪ್ರಕ್ರಿಯಾಭೇದಗಳಿದ್ದರೂ ವೇದಾಂತವು ಹೇಳಿರುವುದು ಅದ್ವೈತವನ್ನು ಮಾತ್ರ ಎಂದು ಆಶಯ. ದ್ವೈತವೇದಾಂತಿಗಳೆಂಬವರು ಆ ಕಾಲದಲ್ಲಿರಲಿಲ್ಲವೆಂದು ಇದರಿಂದ ಗೊತ್ತಾಗುತ್ತದೆ. ಈಗ ಸ್ಮಾರ್ತರೆಲ್ಲರೂ ಶ್ರೀಶಂಕರಾಚಾರ್ಯರ ಸಂಪ್ರದಾಯವನ್ನು ಪರಿಪಾಲಿಸತಕ್ಕವರು.

## ಆಚಾರ್ಯರಿಂದಾದ ಲೋಕೋಪಕಾರಗಳು

ಆಚಾರ್ಯರ ಜೀವನ ಚರಿತೆಯನ್ನು ಪರಾಮರ್ಶಿಸಿದರೆ ಇವರೊಬ್ಬ ಕರ್ತೃತ್ವಶಕ್ತಿಯುಳ್ಳ ಮಹಾಪುರುಷರೆಂದು ಯಾರಿಗಾದರೂ ಹೊಳೆಯದಿರದು. ಆ ಕಾಲದಲ್ಲಿ ಭರತಖಂಡದ ಆದ್ಯಂತವನ್ನು ಕಾಲ್ನಡಿಗೆಯಿಂದಲೇ ಸಂಚರಿಸಿ ವೈದಿಕಧರ್ಮವನ್ನು ಪುನರುದ್ಧರಿಸಿರುವುದು ಸಾಮಾನ್ಯ ಕಾರ್ಯವಲ್ಲ. ವೈದಿಕಧರ್ಮದ ತವರು ಮನೆಯಾಗಿದ್ದ ಈ ರಾಷ್ಟ್ರವು ನಾನಾ ಬಗೆಯ ವೇದವಿರುದ್ಧ ಮತಗಳಿಂದ ತುಂಬಿ ಹೋಗಿತ್ತು. ಅದು ಯುಗಮಹಿಮೆಯೆಂಬ ನೆವದಲ್ಲಿ ಸುಮ್ಮನಿರುವುದು ಆ ಮಹಾ ಚೇತನಕ್ಕೆ ಒಗ್ಗಲಿಲ್ಲ. ಆಸೇತು ಹಿಮಾಚಲ ಪರ್ಯಂತವಾಗಿ ಮತ್ತೆ ಮತ್ತೆ ಸಂಚರಿಸಿ ಅವೈದಿಕ ಮತಗಳನ್ನು ಖಂಡಿಸಿ ವೈದಿಕಧರ್ಮವನ್ನು ರಕ್ಷಿಸಿದರು. ಈ ಧರ್ಮವು ದೃಢವಾಗಿ ನಿಲ್ಲಲೆಂದು ಶೃಂಗೇರಿ ಮುಂತಾದ ಕಡೆಗಳಲ್ಲಿ

ಭಾರತದ ನಾಲ್ಕೂದಿಕ್ಕುಗಳಲ್ಲಿಯೂ ಮಠಗಳನ್ನು ಸ್ಥಾಪಿಸಿದುದು ಶ್ರೀಶಂಕರರ ದೂರದರ್ಶಿತ್ವವನ್ನು ಸೂಚಿಸುತ್ತದೆ.

**ಈಶ್ವರನು ಒಬ್ಬನೇ**

ವೇದಾಂತವು ಪರಮಾತ್ಮನನ್ನು ಬ್ರಹ್ಮ ಆತ್ಮ-ಎಂಬ ಶಬ್ದಗಳಿಂದ ವ್ಯವಹರಿಸುತ್ತದೆ. ಶಿವನೇ ಸರ್ವೋತ್ತಮ, ವಿಷ್ಣುವೇ ಸರ್ವೋತ್ತಮ ಮುಂತಾದ ವಾದಗಳು ಅನಂತರ ಹುಟ್ಟಿಕೊಂಡವು. ಈ ಮತಪ್ರಭಾವದಿಂದ ಜನರಲ್ಲಿ ಕಲಹಗಳೂ ಬೆಳೆದವು. ಈ ಮತೀಯ ಕಲಹಗಳಿಂದ ವೇದೋಕ್ತವಾದ ಏಕೇಶ್ವರವಾದವು ಮರೆಯಾಯಿತು. ಈ ಮತೀಯ ಕಲಹಗಳಿಂದ ಸಮಾಜವು ವಿಚ್ಛಿದ್ರವಾಗುತ್ತದೆಯೆಂದು ನಿಶ್ಚಯಿಸಿ, ಶ್ರೀಶಂಕರರು ರಾಷ್ಟ್ರದ ಏಕತೆ ಮತ್ತು ಸಮಗ್ರತೆಗಳನ್ನುಳಿಸಬೇಕೆಂದು ಕಾರ್ಯಪ್ರವೃತ್ತರಾದರು. ವೇದೋಕ್ತವಾದ ಏಕೇಶ್ವರಸಿದ್ಧಾಂತದಿಂದಲೇ ಸರ್ವಮತಗಳ ಸಾಮರಸ್ಯವನ್ನು ಸಾಧಿಸಬೇಕೆಂದು ಪಂಚಾಯತನ ಪೂಜೆಯನ್ನು ಆಚರಣೆಗೆ ತಂದರು. ಸೂರ್ಯ, ಗಣಪತಿ, ಅಂಬಿಕಾ (ಶಕ್ತಿ ದೇವತೆ) ಶಿವ, ವಿಷ್ಣು, ಇವೇ ಪಂಚದೇವತೆಗಳು. ಇವರೆಲ್ಲರೂ ಒಬ್ಬ ಪರಮಾತ್ಮನ ವಿವಿಧರೂಪಗಳು. ಇವರಲ್ಲಿ ತಾರತಮ್ಯವಾವುದೂ ಸಲ್ಲದು. ಯಾರನ್ನು ಪೂಜಿಸಿದರೂ ಜಗದೀಶ್ವರನೊಬ್ಬನಿಗೇ ಸಲ್ಲುವುದು. ಇವನು ಅಧಿಕ, ಇವನು ಕೀಳು-ಎಂಬ ಭೇದವು ಬೇಡವೆಂದು ಉಪದೇಶಿಸಿದರು.

ಆಚಾರ್ಯರು ಸ್ವತಃ ಶಿವ, ವಿಷ್ಣು ಗಣಪತಿ, ಅಂಬಿಕಾ ಮುಂತಾದ ವಿವಿಧದೇವತೆಗಳನ್ನು ಕುರಿತು ಭಕ್ತಿಪೂರ್ವಕವಾದ ಸ್ತೋತ್ರಗಳನ್ನು ರಚಿಸಿ, ಏಕೇಶ್ವರ ಸಿದ್ಧಾಂತವನ್ನು ಪ್ರೋತ್ಸಾಹಿಸಿದ್ದಾರೆ.

ಆಚಾರ್ಯರು ಯಾವ ಹೊಸಮತವನ್ನೂ ಸ್ಥಾಪಿಸಲಿಲ್ಲ. ಶೈವ, ವೈಷ್ಣವ-ಇತ್ಯಾದಿ ಮತೀಯನಾಮಗಳಂತೆ ಶಾಂಕರ ಎಂಬ ಯಾವ ಮತವೂ ಇಲ್ಲ. ಹೊಸದೊಂದು ಮತೀಯ ಗುಂಪನ್ನು ಶಂಕರಾಚಾರ್ಯರು ಸ್ಥಾಪಿಸಲಿಲ್ಲ.

## ವಿಶ್ವಕುಟುಂಬ

ಅಣ್ಣತಮ್ಮಂದಿರಲ್ಲಿ ತಂದೆಯ ಒಂದೇ ರಕ್ತವು ಹರಿಯುವುದರಿಂದ ಅವರು ಜಗಳವಾಡದೆ ಭ್ರಾತೃತ್ವ ವಾತ್ಸಲ್ಯದಿಂದ ಬಾಳಬೇಕು ಎಂಬುದು ನ್ಯಾಯವಾದದ್ದು. ಆಚಾರ್ಯರು ಇನ್ನೂ ಮುಂದೆ ಹೋಗಿ "ಈ ಪೃಥ್ವಿಯಲ್ಲಿರುವ ಸಕಲರೂ ಅಣ್ಣ ತಮ್ಮಂದಿರೇ. ನೀವೆಲ್ಲರೂ ಪರಮಾತ್ಮನ ಮಕ್ಕಳೇ. ಪರಮಾತ್ಮನ ಪ್ರತಿಬಿಂಬಗಳೇ. ವಾಸ್ತವದಲ್ಲಿ ಪರಮಾತ್ಮ ಸ್ವರೂಪರೇ ಆಗಿದ್ದೀರಿ. ಎಲ್ಲರಿಗೂ ತಾನು-ತನ್ನ ಆತ್ಮನು ಪ್ರಿಯತಮನಾಗಿರುತ್ತಾನೆ. ಎಲ್ಲರೂ ನಿಮ್ಮ ಆತ್ಮನೇ ಆಗಿರುವಾಗ ಜಗಳವೇತಕ್ಕೆ?"ಎಂದು

ಬೋಧಿಸುತ್ತಾರೆ. ಶ್ರೀಶಂಕರರ ಬೋಧೆಯನ್ನು ಸರಿಯಾಗಿ ಅರ್ಥಮಾಡಿಕೊಂಡರೆ ಯಾವ ಕಲಹಕ್ಕೂ ನಿಮಿತ್ತವೇ ಇರುವುದಿಲ್ಲ. 'ಯತ್ರ ವಿಶ್ವಂ ಭವತ್ಯೇಕನೀಡಮ್' ಎಂಬ ವಾಣಿಯು ಸತ್ಯವಾಗಿ ವಿಶ್ವವೇ ನಮ್ಮ ಒಂದು ಮನೆಯಾಗಿ ಬಿಡುತ್ತದೆ.

## ರಾಷ್ಟ್ರದ ಏಕತೆಯ ದೃಢೀಕರಣ

ನಮ್ಮ ಭಾರತದೇಶದಲ್ಲಿ ನೂರಾರು ಭಾಷೆಗಳನ್ನಾಡುವ ಪ್ರಜೆಗಳಿದ್ದರೂ ನೂರಾರು ಜಾತಿಭೇದಗಳಿದ್ದರೂ "ಭಾರತವು ಒಂದು ರಾಷ್ಟ್ರ" ಎಂಬ ಏಕತಾಭಾವನೆಯು ಅನಾದಿಕಾಲದಿಂದಲೂ ಇದೆ. ಇದಕ್ಕೆ ನಿಮಿತ್ತವೇನು? ರಾಜಕೀಯವಾದ ಏಕತೆಯಂತೂ ಅಲ್ಲ. ಹಿಂದಿನಿಂದಲೂ ಇಲ್ಲಿ ಸ್ವತಂತ್ರರಾದ ರಾಜರಿದ್ದರು. ಅವರು ಪರಸ್ಪರ ಯುದ್ಧಗಳನ್ನು ಮಾಡುತ್ತಿದ್ದರು. ಆದರೂ ನಾವು ಭಾರತೀಯರು ಎಂಬ ವಿಶ್ವಾಸವು ಜನತೆಯಲ್ಲಿ ಅಚಲವಾಗಿ ನೆಲೆಸಿತ್ತು. ಏಕೆಂದರೆ, ವೇದ ಮತ್ತು ಸಂಸ್ಕೃತ ಸಾಹಿತ್ಯಗಳಿಂದ ನಿರ್ಮಿತವಾದ ಒಂದೇ ಸಂಸ್ಕೃತಿ ಆಸೇತು ಹಿಮಾಚಲವಾಗಿ ನೆಲೆಸಿತ್ತು. ಅದೇ ಭಾರತೀಯ ಸಂಸ್ಕೃತಿ, ಅದೇ ಏಕರಾಷ್ಟ್ರತಾ ನಿಬಂಧನ. ಈ ವೈದಿಕ ಸಂಸ್ಕೃತಿಯನ್ನು ರಾಷ್ಟ್ರದ ತುಂಬ ಪ್ರಚಾರಮಾಡಿ, ನಾನಾ ಸಂಸ್ಕೃತಗ್ರಂಥಗಳನ್ನು ರಚಿಸಿ, ಅವುಗಳ ಅಧ್ಯಯನವನ್ನು

ಪ್ರೋತ್ಸಾಹಿಸಿ ಈ ರಾಷ್ಟ್ರದ ಏಕತೆಯನ್ನೂ ಸಮಗ್ರತೆಯನ್ನೂ ದೃಢಗೊಳಿಸಿದವರು ಶ್ರೀಶಂಕರಾಚಾರ್ಯರು.

ಹೀಗೆ ನಾನಾವಿಧವಾಗಿ ಭಾರತಾಂಬೆಯ ಸೇವೆಯನ್ನು ಮಾಡಿದ ಮಹಾಪುರುಷರು ಶ್ರೀಶಂಕರಭಗವತ್ಪಾದರು. ಅವರ ಸಂಸ್ಕೃತಭಾಷಾಶೈಲಿ ಮನೋಹರವಾದದ್ದು. ಭಾಷೆಯನ್ನು ಹೇಗೆ ಬರೆಯಬೇಕೆಂಬುದಕ್ಕೆ ಅವರ ಗ್ರಂಥಗಳು ಉದಾಹರಣೆಯಾಗುತ್ತವೆ. ಅವರು ಎಷ್ಟು ದೊಡ್ಡ ವಿದ್ವಾಂಸರಾಗಿದ್ದರೋ ಅಷ್ಟೇ ದೊಡ್ಡ ಉತ್ತಮ ಕವಿಗಳೂ ಆಗಿದ್ದರು. ಶಿವಾನಂದಲಹರಿ, ಸೌಂದರ್ಯಲಹರಿ ಮುಂತಾದ ಸ್ತೋತ್ರಗಳಲ್ಲಿ ಅವರ ಕವಿತಾಸಾಮರ್ಥ್ಯವು ಎಂತಹುದೆಂಬುದು ಗೊತ್ತಾಗುತ್ತದೆ. ಹಿಂದೆ ಹೇಳಿದ ಭಾಷ್ಯಗಳನ್ನಲ್ಲದೆ ವಿವೇಕಚೂಡಾಮಣಿ, ದೃಗ್ದೃಶ್ಯವಿವೇಕ ಮುಂತಾದ ಹಲವು ಗ್ರಂಥಗಳನ್ನು ಜಿಜ್ಞಾಸುಗಳ ಉಪಕಾರಕ್ಕಾಗಿ ರಚಿಸಿದ್ದಾರೆ. ಯಾವ ಪಕ್ಷಪಾತವನ್ನೂ ಮಾಡದೆ ಮಧ್ಯಸ್ಥರಾಗಿ ವಿಚಾರಮಾಡಿದರೆ ಈ ರಾಷ್ಟ್ರದಲ್ಲಿ ಜನಿಸಿದ, ಇನ್ನೊಂದು ಹೋಲಿಕೆಯಿಲ್ಲದ ಮಹಾಪುರುಷರು ಯಾರೆಂದರೆ ಶ್ರೀಶಂಕರಭಗವತ್ಪಾದರೆಂದು ನಿಶ್ಚಯದಿಂದ ಹೇಳಬಹುದು. ಅವರ ಜೀವಿತ ಕಾಲ ಕೇವಲ ಮೂವತ್ತೆರಡು ವರ್ಷಗಳು

ಅಷ್ಟು ಅಲ್ಪಕಾಲದಲ್ಲಿ ಇಷ್ಟು ಕಾರ್ಯಗಳನ್ನು ಸಾಧಿಸಿದ್ದಾರೆಂಬುದು ವಿಸ್ಮಯಕಾರಿ ಯಾದದ್ದು.

**ದ್ವಾತ್ರಿಂಶದ್ವತ್ಸರಾದರ್ವಾಗೀದೃಕ್ತೇ ಕೃತಿವೈಭವಮ್ ।**
**ಸರ್ವಜ್ಞಃ ಶಂಕರೋऽಸಿ ತ್ವಾಂ ನಮಸ್ಕುರ್ಮೋ ಯಥಾಬಲಮ್ ॥**

*- ಎನ್. ರಂಗನಾಥ ಶರ್ಮಾ*

## ಎರಡು ಉದ್ಧರಣಗಳು

1. **Jawaharlal Nehru**
   *(Discovery of India)*
   In a brief life of thirty two years he did the work of many longlives and left such an impress of his powerful mind and rich personality on india that it is evident to day

2. **E. W. F. Tomlin**
   With Sankara we have to do with a philosophor of very diffrent calibre. In fact we have with one of the greatest of all the philosophers, whose work ought to be betterknown is the occident that it is.

# ಶ್ರೀ ಶಂಕರ ಭಗವತ್ಪಾದ ವಿರಚಿತ ದಶಶ್ಲೋಕೀ

ನ ಭೂಮಿರ್ನ ತೋಯಂ ನ ತೇಜೋ ನ ವಾಯುಃ
ನ ಖಂ ನೇಂದ್ರಿಯಂ ವಾ ನ ತೇಷಾಂ ಸಮೂಹಃ ।
ಅನೈಕಾಂತಿಕತ್ವಾತ್ ಸುಷುಪ್ತ್ಯೇಕ ಸಿದ್ಧಃ
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥೧॥

ನ ವರ್ಣಾ ನ ವರ್ಣಾಶ್ರಮಾಚಾರಧರ್ಮಾ
ನ ಮೇ ಧಾರಣಾಧ್ಯಾನಯೋಗಾದಯೋಽಪಿ ।
ಅನಾತ್ಮಾಶ್ರಯಾಹಂ ಮಮಾಧ್ಯಾಸಹಾನಾತ್
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥೨॥

ನ ಮಾತಾ ಪಿತಾ ವಾ ನ ದೇವಾ ನ ಲೋಕಾ
ನ ವೇದಾ ನ ಯಜ್ಞಾ ನ ತೀರ್ಥಂ ಬ್ರುವಂತಿ ।
ಸುಷುಪ್ತೌ ನಿರಸ್ತಾತಿಶೂನ್ಯಾತ್ಮಕತ್ವಾತ್
ತದೇಕೋಽವಶಿಷ್ಟಃ ಶಿವಃ ಕೇವಲೋಽ ಹಮ್ ॥೩॥

ನ ಸಾಂಖ್ಯಂ ನ ಶೈವಂ ನ ತತ್‌ಪಾಂಚರಾತ್ರಂ
ನ ಜೈನಂ ನ ಮೀಮಾಂಸಕಾದೇರ್ಮತಂ ವಾ।
ವಿಶಿಷ್ಟಾನುಭೂತ್ಯಾ ವಿಶುದ್ಧಾತ್ಮಕತ್ವಾತ್
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥೪॥

ನ ಚೋರ್ಧ್ವಂ ನ ಚಾಧೋ ನ ಚಾಂತರ್ನ ಬಾಹ್ಯಂ
ನ ಮಧ್ಯಂ ನ ತಿರ್ಯಜ್‌ನ ಪೂರ್ವಾಪರಾ ದಿಕ್ ।
ವಿಯದ್ವ್ಯಾಪಕತ್ವಾದಖಂಡೈಕರೂಪಃ
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥೫॥

ನ ಶುಕ್ಲಂ ನ ಕೃಷ್ಣಂ ನ ರಕ್ತಂ ನ ಪೀತಂ
ನ ಕುಬ್ಜಂ ನ ಪೀನಂ ನ ಹ್ರಸ್ವಂ ನ ದೀರ್ಘಮ್ ।
ಅರೂಪಂ ತಥಾ ಜ್ಯೋತಿರಾಕಾರಕತ್ವಾತ್
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥೬॥

ನ ಶಾಸ್ತಾ ನ ಶಾಸ್ತ್ರಂ ನ ಶಿಷ್ಯೋ ನ ಶಿಕ್ಷಾ
ನ ಚ ತ್ವಂ ನ ಚಾಹಂ ನ ಚಾಯಂ ಪ್ರಪಂಚಃ ।
ಸ್ವರೂಪಾವಬೋಧೋ ವಿಕಲ್ಪಾಸಹಿಷ್ಣುಃ
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥೭॥

ನ ಜಾಗ್ರನ್ನಮೇ ಸ್ವಪ್ನಕೋ ವಾ ಸುಷುಪ್ತಿಃ
ನ ವಿಶ್ವೋ ನ ವಾ ತೈಜಸಃ ಪ್ರಾಜ್ಞಕೋ ವಾ ।
ಅವಿದ್ಯಾತ್ಮಕತ್ವಾತ್ ತ್ರಯಾಣಾಂ ತುರೀಯಃ
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥೮॥

ಅಪಿ ವ್ಯಾಪಕತ್ವಾದ್ಧಿತತ್ವ ಪ್ರಯೋಗಾತ್
ಸ್ವತಃ ಸಿದ್ಧಭಾವಾದನನ್ಯಾಶ್ರಯತ್ವಾತ್ ।
ಜಗತ್ತುಚ್ಛಮೇತತ್ಸಮಸ್ತಂ ತದನ್ಯತ್
ತದೇಕೋಽವಶಿಷ್ಟಃ ಶಿವಃ ಕೇವಲೋಽಹಮ್ ॥೯॥

ನ ಚೈಕಂ ದ್ವಿತೀಯಂ ತದನ್ಯತ್ ಕುತಃ ಸ್ಯಾತ್
ನ ವಾ ಕೇವಲತ್ವಂ ನ ಚಾಕೇವಲತ್ವಮ್ ।
ನ ಶೂನ್ಯಂ ನ ಚಾಶೂನ್ಯಮದ್ವೈತಕತ್ವಾತ್
ಕಥಂ ಸರ್ವವೇದಾಂತಸಿದ್ಧಂ ಬ್ರವೀಮಿ ॥೧೦॥



## ಶ್ರೀಶಂಕರಭಗವತ್ಪಾದಸ್ತುತಿಃ

ನಮಃ ಶ್ರೀಶಂಕರಾಚಾರ್ಯಭಗವತ್ಪಾದಮೂರ್ತಯೇ ।
ವಿಪಶ್ಚಿದ್ಗೀತ ಪೂರ್ಣೇಂದು ಕಿರಣ ಸ್ವಚ್ಛಕೀರ್ತಯೇ ॥೧॥

ಶ್ರೀ ಶಂಕರಭಗವತ್ಪಾದರ ಕೀರ್ತಿ ಪೂರ್ಣಚಂದ್ರನ ಕಿರಣದಂತೆ ಶುಭ್ರವಾದುದು. ವಿದ್ವಾಂಸರು ಅದನ್ನು ಕೊಂಡಾಡುತ್ತಾರೆ. ಅಂಥ ಆಚಾರ್ಯರಿಗೆ ನಮಸ್ಕಾರಗಳು.

ನಿರ್ದೋಷಾದ್ವೈತಲಕ್ಷ್ಮೀವದನಸರಸಿಜೋಲ್ಲಾಸಕಮಾರ್ಂಶುಮಾಲೀ
ಭಾಸ್ವದ್ವೇದಾಂತವಾಣೀನಯನಯುಗಲನೀಲೋತ್ಪ
ಲೋನ್ಮೇಷಖೇಲೀ।
ಧರ್ಮದ್ರೋಹಪ್ರಸಕ್ತಪ್ರತಿಭಟಕಟುವೃಕ್ಷಾವಲೀದಾಹಕಾರೀ
ತೇಜಸ್ತ್ರೈಧಂ ದಧಾನೋ ಜಗತಿ ವಿಜಯತೇ ಶಂಕರಃ ಸದ್ಗುರುರ್ನಃ ॥೨॥

ಆಚಾರ್ಯರು ಪರಿಶುದ್ಧವಾದ ಅದ್ವೈತಲಕ್ಷ್ಮಿಯ ಮುಖಕಮಲವನ್ನು ಅರಳಿಸುವುದರಲ್ಲಿ ಸೂರ್ಯನಂತಿರುವವರು. ಬೆಳಗುತ್ತಿರುವ ವೇದಾಂತಲಕ್ಷ್ಮಿಯ ನೇತ್ರಗಳೆಂಬ ಕನ್ನೈದಿಲೆಗಳನ್ನು ಅರಳಿಸುವುದರಲ್ಲಿ ಚಂದ್ರನಂತಿರುವವರು. ಧರ್ಮದ್ರೋಹದಲ್ಲಿ ತೊಡಗಿದ ಎದುರಾಳಿಗಳೆಂಬ ಕಟುವೃಕ್ಷಗಳನ್ನು ಸುಡತಕ್ಕ ಅಗ್ನಿಯಾಗಿರುವವರು. ಹೀಗೆ ಮೂರು ವಿಧವಾದ ತೇಜಸ್ಸನ್ನು ಧರಿಸಿರುವ ಸದ್ಗುರುಗಳಾದ ನಮ್ಮ ಶಂಕರರು ಮೂರು ಲೋಕಗಳಲ್ಲಿ ಸರ್ವೋತ್ಕೃಷ್ಟರಾಗಿ ಶೋಭಿಸುತ್ತಿದ್ದಾರೆ.

ವಿದ್ಯಾಂ ಕೇಚನ ತತ್ತ್ವಬೋಧಮಪರೇ ಬುದ್ಧಿಂ ವಿಶುದ್ಧಾಂ ಪರೇ
ವಾಗ್ಮಿತ್ವಂ ಕತಿಚಿತ್ ಸ್ತುವಂತಿ ಭಗವದ್ಭಕ್ತಿಂ ಸ್ವಧರ್ಮಂ ಯತೌ।
ಔದಾರ್ಯಂ ತು ಪರೇ ವಿರಕ್ತಿಮಪರೇ ಕಾರುಣ್ಯಮನ್ಯೇ ತಪಃ
ಶ್ರೀಮಚ್ಛಂಕರಭಾರತೀಯತಿಪತೌ ಸ್ಮ್ಯಾಯಂತಿ ಸರ್ವೇ ಗುಣಾಃ ॥೩॥

ಕೆಲವರು ಒಬ್ಬ ಯತಿಯಲ್ಲಿ ಇರಬೇಕಾದ ಪಾಂಡಿತ್ಯವನ್ನು ಹೊಗಳಿದರೆ ಮತ್ತೆ ಕೆಲವರು ಅವರ ತತ್ತ್ವಜ್ಞಾನವನ್ನು ಪ್ರಶಂಸಿಸುತ್ತಾರೆ. ಕೆಲವರು ಅವರ ಸ್ವಚ್ಛವಾದ ಬುದ್ಧಿಯನ್ನು,

ಕೆಲವರು ವಾಗ್ಮಿತೆಯನ್ನು, ಕೆಲವರು ಭಗವದ್ಭಕ್ತಿಯನ್ನು, ಕೆಲವರು ಸ್ವಧರ್ಮ ನಿಷ್ಠೆಯನ್ನು ಪ್ರಶಂಸಿಸುತ್ತಾರೆ. ಅವರ ಔದಾರ್ಯವನ್ನು ಕೆಲವರು, ವೈರಾಗ್ಯವನ್ನು ಕೆಲವರು, ಕಾರುಣ್ಯವನ್ನು ಕೆಲವರು, ತಪಸ್ಸನ್ನು ಕೆಲವರು ಹೀಗೆ ಒಬ್ಬೊಬ್ಬರೂ ಅವರ ಒಂದೊಂದು ಗುಣವನ್ನು ಹೊಗಳುತ್ತಾರೆ. ಆದರೆ ನಮ್ಮ ಶ್ರೀ ಶಂಕರಭಗವತ್ಪಾದರಲ್ಲಿ ಈ ಎಲ್ಲ ಗುಣಗಳೂ ಒಂದುಗೂಡಿವೆ.

ಪರಂ ಶಾಂತಮಾಸ್ಯಂ ಸ್ಥಿರಂ ನೇತ್ರಯುಗ್ಮಂ
ಕರಃ ಸಾಕ್ಷಮಾಲಃ ಪುರಃ ಶಿಷ್ಯವೃಂದಮ್ ।
ಉರೋ ಭಸ್ಮಲಿಪ್ತಂ ವಪುರ್ದಿವ್ಯಶೋಭಂ
ಸ್ಮಿತಂ ಚಂದ್ರಿಕಾಽಸ್ಮದ್‌ಗುರೋಃ ಶಂಕರಸ್ಯ ॥೪॥

ಶಾಂತವಾದ ಮುಖ, ಸ್ಥಿರವಾದ ದೃಷ್ಟಿ, ಕೈಯಲ್ಲಿ ಜಪಸರ, ಮುಂದುಗಡೆ ಶಿಷ್ಯರ ಸಮೂಹ, ಎದೆಯಲ್ಲಿ ಭಸ್ಮಲೇಪನ, ದಿವ್ಯಸುಂದರ ಶರೀರ, ಬೆಳದಿಂಗಳಂಥ ಮುಗುಳುನಗೆ - ಇದು ನಮ್ಮ ಗುರು ಶಂಕರರ ದಿವ್ಯರೂಪ!

ಭಾಸ್ವತ್ತ್ರಿವೇಣೀಸದೃಶೀ ತ್ರಿಪುಂಡ್ರೀ
ಭಾಲೇ ಗುರೋಃ ಕೌತುಕಮಾತನೋತಿ ।
ಭಸ್ಮೀಕೃತೈಷಾ ಗುರುಣಾ ಗುಣತ್ರಯೀ
ತಾಪತ್ರಯೀ ವಾ ಕಿಮುಪಾಶ್ರಿತಾನಾಮ್ ॥೫॥

ಗುರುಗಳ ಲಲಾಟದಲ್ಲಿ ತೋರುತ್ತಿರುವ, ಶೋಭಾಯುಕ್ತವಾದ ತ್ರಿವೇಣಿಯಂತಿರುವ ಭಸ್ಮದ ಮೂರು ಗೆರೆಗಳು ನೋಟಕರಲ್ಲಿ ಕುತೂಹಲವನ್ನು ಮೂಡಿಸುತ್ತಿವೆ. ಇವೇನು ಗುರುಗಳು ಸುಟ್ಟು ಭಸ್ಮ ಮಾಡಿದ ಮೂರು ಗುಣಗಳೊ ಅಥವಾ ತಾವು ದಹಿಸಿದ ತಮ್ಮ ಭಕ್ತರ ಮೂರು ತಾಪಗಳೋ ಎಂಬಂತಿವೆ ಆ ಗೆರೆಗಳು!

*ಟಿಪ್ಪಣಿ : ಮೂರು ಗುಣಗಳು = ಸತ್ತ್ವ, ರಜಸ್ತಮೋ ಗುಣಗಳು. ತಾಪತ್ರಯ =* ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ.

ಮಮತಾ ಶಮಿತಾ ಭವತಾಪನುದಾ
ಭವತಾ ನರತಾ ಮಮ ಚಾಪಗತಾ ।
ವಿದಿತೋಽಸಿ ಗುರೋ ಶಿವ ಏವ ಭವಾನ್
ಚರಣಂ ಶರಣಂ ಕರವಾಣಿ ಪರಮ್ ॥೬॥

ಸಂಸಾರ ತಾಪವನ್ನು ಹೋಗಲಾಡಿಸುವ ನಿನ್ನಿಂದ ನನ್ನ ಮಮಕಾರವು ಶಾಂತವಾಯಿತು. ನನ್ನ ಈ ನರಜನ್ಮವು ದೂರವಾಯಿತು. ನೀನು ಸಾಕ್ಷಾತ್ ಶಿವನೆಂಬುದನ್ನು ಅರಿತೆ. ಹೇ ಗುರುವೆ! ನಿನ್ನ ಶ್ರೇಷ್ಠ ಚರಣಗಳನ್ನೇ ನಾನು ಆಶ್ರಯಿಸುತ್ತೇನೆ.

ಗಾಂಗೇಯವಾರಿ ಹರಿದಶ್ವಕರಾನುರಕ್ತಂ
ಸಂಸ್ಪರ್ಶನಾತ್ತನುವಿಶೋಧನಕಾರಿ ದೃಷ್ಟಮ್ ।
ಕಾಷಾಯಧಾರಿ ಭವದೀಯವಪುರ್ನರಾಣಾಂ
ಸಂದರ್ಶನಾತ್ತು ಕರಣತ್ರಯಶುದ್ಧಿಕಾರಿ ॥೭॥

ಉದಯರವಿಯ ಹೊಂಬಣ್ಣದ ಕಿರಣಗಳನ್ನು ಪ್ರತಿಫಲಿಸುತ್ತಿರುವ ಗಂಗಾಜಲವನ್ನು ಸ್ಪರ್ಶಿಸಿದರೆ ಅದು ಶರೀರದ ಕೊಳೆಯನ್ನು ತೊಡೆದು ಹಾಕುತ್ತದೆ. ಕಾಷಾಯ ವಸನ ವನ್ನುಟ್ಟ ನಿನ್ನನ್ನು ಕೇವಲ ದರ್ಶನ ಮಾಡಿದರೂ ಸಾಕು, ಆ ದರ್ಶನವೇ ಮಾನವರ ಮನೋವಾಕ್ಕಾಯಗಳನ್ನು ಶುದ್ಧಿಗೊಳಿಸುತ್ತದೆ.

**ಸುಖಮರೀಚಿಕಯಾ ಮಮ ತಾಮ್ಯತೋ**
**ಗುರುವಚೋಽಮೃತಮೇವ ಪಿಪಾಸತಃ ।**
**ಅಧಿಗತಂ ತದಹೋ ತ್ವದುದೀರಿತಂ**
**ಸಮಧುರಂ ಮಧುರಂ ಮಧುನಾಽಧುನಾ ॥೮॥**

*ಟಿಪ್ಪಣಿ : ಮಧುನಾ ಸಮಾ ಧೂಃ ಯಸ್ಯ ತತ್ ಸಮಧುರಂ, ಮಧುನಾ ಸಮಧುರಂ, ತತ್ಸದೃಶಮಿತ್ಯರ್ಥಃ ।*

ಸುಖವೆಂಬ ಮರುಮರೀಚಿಕೆಯ ಮೇಲೆ ಆಸೆಯಿಟ್ಟು ದುಃಖಿತನಾಗಿ ಗುರುವಚನ ವೆಂಬ ಅಮೃತವನ್ನೇ ಕುಡಿಯಲು ಬಯಸಿದ ನನಗೆ ಈಗ ನಿನ್ನ ಜೇನಿನಂಥ ಸವಿಯಾದ ಮಾತು ದೊರಕಿತು: ಅಹಾ! ಎಂಥ ಅದೃಷ್ಟ!

ವಿದ್ವಜ್ಜಾಲತಪಃಫಲಂ ಕಥಿತಮಾಚಾರ್ಯಸ್ಯ ಭಾಷ್ಯಂ ಪುರಾ
ವಿದ್ಯಾರಣ್ಯಯತೀಶ್ವರೈಃ ಕವಿವರೈಃ ಸಾಧೂಕ್ತಮೇತದ್ವಚಃ ।
ನೋ ಚೇತ್ತಾದೃಶರಮ್ಯವಾಕ್ಯಸುಭಗಂ ಗಂಭೀರಶಾಸ್ತ್ರಾರ್ಥಗಂ
ಹೃದ್ಯಂ ವ್ಯಾಸಮುನೇರಭೂದುಪಗತಂ ವಿದ್ವದ್ಭಿರೇತ್ಯೈಃ ಕಥಮ್ ॥೯॥

*ಟಿಪ್ಪಣಿ : ಹೃದ್ಯಂ ವ್ಯಾಸಮುನೇಃ =ಸೂತ್ರಕರ್ತ್ರಾ ವ್ಯಾಸಮುನಿನಾ ಹೃದಯೇನಾಭ್ಯನುಜ್ಞಾತಂ ಶಾರೀರಕಸೂತ್ರಭಾಷ್ಯಮ್. ಅತ ಏವ ತಪೋ ವಿನಾ ವಿದುಷಾಂ ದುರ್ಲಭಮಿತಿ ಭಾವಃ ।*

ಈ ಹಿಂದೆ ಯತೀಶ್ವರರೂ ಕವೀಶ್ವರರೂ ಆದ ವಿದ್ಯಾರಣ್ಯರು ಆಚಾರ್ಯರ ಭಾಷ್ಯವನ್ನು ವಿದ್ವನ್ಮಂಡಲಿಯ ತಪಸ್ಸಿನ ಫಲವೆಂದು ಬಣ್ಣಿಸಿದ್ದಾರೆ. ಅದು ಸರಿಯಾದದ್ದೆ. ಅದಲ್ಲವಾದರೆ ಅಂಥ ರಮಣೀಯ ವಾಕ್ಯಗಳಿಂದ ಸುಂದರವಾದ, ಗಂಭೀರ ಶಾಸ್ತ್ರಾರ್ಥವನ್ನೊಳಗೊಂಡ, ವ್ಯಾಸರ ಹೃದಯಸಂಮತವಾದ ಆ ಭಾಷ್ಯವು ಈ ವಿದ್ವಾಂಸರಿಗೆ ಹೇಗೆ ತಾನೆ ಲಭ್ಯವಾಗುತ್ತಿತ್ತು?

**ವೇದಾಂತಃ ಕಾವ್ಯಮೇತದ್ದ್ವಯಮಪಿ ಗುಣತೋಽನ್ಯೋನ್ಯರೋಧೀತಿ ಬುದ್ಧಿಂ**
**ಧತ್ತೇ ಲೋಕೋ ಗುರೋ ತ್ವದ್ವಚನಮಧುರತಾ ಯೇನ**
**ಲೀಢಾ ನ ಜಾತು।**
**ಪ್ರತ್ಯಕ್ಷಾ ವೈದ್ಯಸೃಷ್ಟೇ ಮಧುರಗುಣನಿಕಾ ಲೇಹ್ಯಕಲ್ಪೇಽಥ ಭಾಷ್ಯೇ**
**ನ್ಯಸ್ತಾ ಸಂಸಾರರೋಗಪ್ರಶಮಿನಿ ಕೃಪಯಾ ಸಾ ತ್ವಯಾದ್ಯ**
**ಕ್ವ ಯಾತು ॥೧೦॥**

*ಟಿಪ್ಪಣಿ: ಲೇಹ್ಯಕಲ್ಪೇ = ಅತ್ರ ಕಲ್ಪಶಬ್ದಃ ಸ್ವತಂತ್ರಃ ವೈದ್ಯನಿಕಾಯೇ ಪ್ರಸಿದ್ಧಃ. ಲೇಹ್ಯಕಲ್ಪೇ ಇತ್ಯಸ್ಯ ಭಾಷ್ಯೇ ಇತ್ಯತ್ರಾಪ್ಯನ್ವಯಃ. ಅತ್ರ ತು ಕಲ್ಪಃ ಪ್ರತ್ಯಯಃ ಈಷನ್ನ್ಯೂನೇ ಕಲ್ಪಪ್‌ದೇಶ್ಯದೇಶೀಯರಃ ಇತಿ ಸೂತ್ರೇಣ ವಿಹಿತಃ; ಲೇಹ್ಯಕಲ್ಪೇ ಭಾಷ್ಯೇ = ಲೇಹ್ಯ ಸದೃಶೇ ಭಾಷ್ಯೇ.*

ಹೇ ಗುರೋ! ಯಾರು ನಿನ್ನ ವಚನಗಳ ಮಾಧುರ್ಯವನ್ನು ಒಮ್ಮೆ ಕೂಡಾ ಸವಿದಿಲ್ಲವೋ ಅಂಥ ಜನರು ವೇದಾಂತ, ಕಾವ್ಯ ಈ ಎರಡೂ ಪರಸ್ಪರ ವಿರುದ್ಧ

ಸ್ವಭಾವದವುಗಳೆಂದು ನಂಬುತ್ತಾರೆ. ವೈದ್ಯರು ತಯಾರಿಸುವ ಲೇಹ್ಯದಲ್ಲಿ ಮಾಧುರ್ಯ ಹಾಗೂ ರೋಗನಾಶಕ ಗುಣವಿರುವುದು ಪ್ರಸಿದ್ಧವಾಗೇ ಇದೆ. ಅದೇ ರೀತಿ ಲೇಹ್ಯಕ್ಕೆ ಸಮಾನವಾದ, ಸಂಸಾರವೆಂಬ ರೋಗವನ್ನು ನಾಶಮಾಡತಕ್ಕ ನಿಮ್ಮ ಭಾಷ್ಯದಲ್ಲಿ ಕಾವ್ಯದ ಮಾಧುರ್ಯವನ್ನೂ ಇರಿಸಿದ್ದೀರಿ. ಅದೆಲ್ಲಿ ಹೋದೀತು? ನಿಮ್ಮ ಭಾಷ್ಯದಲ್ಲಿ ಅದು ಇದ್ದೇ ಇದೆ.

ಓಜಸ್ವಿನೀ ಕ್ವಚಿದುದೀರಿತವಸ್ತುವೃತ್ತ್ಯಾ
ಮಾಧುರ್ಯರಂಜಿತಪದ್ಯೈಃ ಕ್ವಚಿದುದ್ಗತಶ್ರೀಃ ।
ಕಿಂ ಚ ಪ್ರಸಾದಗುಣಶಾಲಿಸುವರ್ಣಶುಭ್ರಾ
ವಾಣೀ ಗುರೋಸ್ತ್ರಿಪಥಗೇವ ವಿಭಾತಿ ಹೃದ್ಯಾ ॥೧೧॥

ಟಿಪ್ಪಣಿ : ಸುವರ್ಣಶುಭ್ರಾ = ಶೋಭನೇನ ಶುಕ್ಲವರ್ಣೇನ ಶುಭ್ರಾ ತ್ರಿಪಥಗಾ. ಶೋಭನೈರಕ್ಷರೈಃ ಶುಭ್ರಾ ಗುರೋರ್ವಾಣೀ, ಸುವರ್ಣಮಿವ ಶುಭ್ರಾ ಚ.

ಆಚಾರ್ಯರ ಮಾತು ಹೇಳುವ ವಿಷಯಕ್ಕೆ ತಕ್ಕಂತೆ ಕೆಲವೆಡೆ ಓಜಃಪೂರ್ಣವಾಗಿರುತ್ತದೆ. ಕೆಲವೆಡೆ ಮಾಧುರ್ಯಪೂರ್ಣವಾದ ಪದಪುಂಜಗಳಿಂದ ಶೋಭಿಸುತ್ತದೆ. ಕೆಲವೆಡೆ ಪ್ರಸಾದಗುಣಭೂಯಿಷ್ಠವಾಗಿ ಸುವರ್ಣದಂತೆ ಶುಭ್ರವಾಗಿ ತೋರುತ್ತದೆ. ಹೀಗೆಯೇ, ಮೂರಾಗಿ ಹರಿದ ಗಂಗಾನದಿಯಂತೆ ಆಚಾರ್ಯರ ವಚನ ಮೂರು ವಿಧವಾಗಿ ನಮ್ಮ ಹೃದಯವನ್ನು ತಲುಪುತ್ತದೆ.

ವಾಚಾಂ ಕಾಚಿತ್ ಪ್ರವಹತಿ ಝರೀ ಭಕ್ತಿನಮ್ರಾ ಸ್ತವೇಷು
ಪ್ರೌಢಾ ಕಾಚಿತ್ ಪ್ರಖರವಚಸಾಂ ಖಂಡನೇ ಪಂಡಿತಾನಾಮ್ ।
ಸೌಮ್ಯಾ ಸಮ್ಯಗ್ವಿನಯನವಿಧೌ ಶಿಷ್ಯವರ್ಗಸ್ಯ ಧನ್ಯಾ
ಗಂಗಾಸ್ರೋತಃಪ್ರಹಸನಪಟುಃ ಸದ್ಗುರೋಃ ಕಾಚಿದನ್ಯಾ ॥೧೨॥

ಸ್ತೋತ್ರವನ್ನು ಮಾಡುವಾಗ ಆಚಾರ್ಯರ ವಾಗ್ಝರಿಯು ಭಕ್ತಿಯಿಂದ ನಮ್ರವಾಗಿರುತ್ತದೆ. ತೀಕ್ಷ್ಣವಾದಿಗಳಾದ ಪಂಡಿತರನ್ನು ಖಂಡಿಸುವಾಗ ಪ್ರೌಢವಾಗಿರುತ್ತದೆ. ಶಿಷ್ಯವರ್ಗವನ್ನು ಬೋಧಿಸುವಾಗ ಸೌಮ್ಯವಾಗಿರುತ್ತದೆ. ಹೀಗೆ ಮೂರು ರೀತಿಯಲ್ಲಿ ತೋರಿ ಗಂಗಾನದಿಯನ್ನೂ ಮೀರಿಸುವ ಆಚಾರ್ಯರ ವಾಗ್ಝರಿಯು ಅನನ್ಯವಾದುದು.

ಪ್ರಸ್ಥಾನತ್ರಯಭಾಷ್ಯಮದ್ಭುತಮಭೂತ್ತ್ವತ್ತಃ ಸಮುದ್ರೋಪಮಂ
ಯದ್ರತ್ನಾನ್ಯುಪಜೀವ್ಯ ಪಂಡಿತವರ್ಯೈರಕ್ಷೋಭ್ಯವೈದುಷ್ಯಕೈಃ ।
ವ್ಯಾಖ್ಯಾ-ವಾರ್ತಿಕ-ವೃತ್ತಿ-ಸಿದ್ಧಿಸಹಿತಾನ್ ನಿರ್ಮಾಯ ಭೂಷಾಗಣಾನ್
ಶ್ರೀಮಚ್ಛಂಕರದೇಶಿಕೇಂದ್ರ ರುಚಿರಾನ್ ಶ್ರೀಶಾರದಾ
ಭೂಷಿತಾ ॥೧೩॥

ಪೂಜ್ಯ ಶಂಕರಾಚಾರ್ಯರೇ! ತಾವು ಅದ್ಭುತಾದ ಪ್ರಸ್ಥಾನತ್ರಯ ಭಾಷ್ಯವನ್ನು ರಚಿಸಿದಿರಿ. ಸಮುದ್ರಸದೃಶವಾದ ಆ ಭಾಷ್ಯದಲ್ಲಿರುವ ರತ್ನಗಳನ್ನು ಸಂಗ್ರಹಿಸಿಕೊಂಡು ಆಳವಾದ ಪಾಂಡಿತ್ಯವುಳ್ಳ ಶ್ರೇಷ್ಠ ವಿದ್ವಾಂಸರು ಆ ರತ್ನಗಳಿಂದ ವ್ಯಾಖ್ಯಾನ-ವಾರ್ತಿಕ-ವೃತ್ತಿ-ಸಿದ್ಧಿ ಮುಂತಾದ ಗ್ರಂಥಗಳೆಂಬ ಸುಂದರ ಆಭರಣಗಳನ್ನು ನಿರ್ಮಿಸಿ ಶಾರದಾದೇವಿಯನ್ನು ಅಲಂಕರಿಸಿದ್ದಾರೆ.

ವೇದೈಃ ಸೂತ್ರೈಃ ಪುರಾಣೈಃ ಸ್ಮೃತಿಭಿರಪಿ ಮಹಾಯೋಗಿನಸ್ತೇಽನುಭೂತ್ಯಾ
ಯುಕ್ತ್ಯಾ ಜಾಗ್ರತ್ಸುಷುಪ್ತಿಸ್ವಪನಕಲಿತಯಾ ರಜ್ಜು
ಸರ್ಪಪ್ರಪಂಚೈಃ।

ಅಧ್ಯಾರೋಪಾಪವಾದೈರ್ಗುರುವರ ಗಹನಂ ಶುದ್ಧಮದ್ವೈತತತ್ತ್ವಂ
ವ್ಯತ್ಪಾದ್ಯಾಸ್ಮಾಕಮಾರ್ತಿಂ ಶಮಯಸಿ ಕರುಣಾಸಾಗರಃ
ಕಸ್ತ್ವದನ್ಯಃ ||೧೪||

ಹೇ ಗುರೋ! ವೇದ, ಸೂತ್ರ, ಪುರಾಣ ಹಾಗೂ ಸ್ಮೃತಿಗಳ ಆಧಾರದಿಂದ, ಮಹಾಯೋಗಿಯಾದ ನಿನ್ನ ಅನುಭವದಿಂದ, ಜಾಗ್ರತ್ ಸ್ವಪ್ನಸುಷುಪ್ತಿಗಳ ಆಧಾರದ ಮೇಲಿನ ಯುಕ್ತಿಗಳಿಂದ, ರಜ್ಜುಸರ್ಪ ಮುಂತಾದ ಭ್ರಮಗಳ ವಿವರಣೆಗಳಿಂದ, ಅಧ್ಯಾರೋಪ-ಅಪವಾದಗಳಿಂದ-ನೀನು ಗಹನವಾದ ಶುದ್ಧಾದ್ವೈತತತ್ತ್ವವನ್ನು ತಿಳಿಹೇಳಿ ನಮ್ಮ ದುಃಖವನ್ನು ನಿವಾರಿಸುತ್ತೀಯೆ. ನಿನ್ನಂಥ ಕರುಣಾಶಾಲಿಗಳು ಬೇರೆ ಯಾರಿದ್ದಾರೆ?

ಉಪರ್ಯುಪರ್ಯೇತ್ಯ ಯದರ್ಥತತ್ತ್ವಂ
ಜಗದ್ಗುರೋರ್ಧೀರ್ಭೃಶಮಾಲುಲೋಕೇ।
ಅತೀತ್ಯ ತದ್ವ್ಯಧಿಕಮನ್ಯದೀಕ್ಷಿತುಂ
ಸುಧೀರ್ನ ಕಶ್ಚಿತ್ ಪ್ರಭುರಸ್ತಿ ಲೋಕೇ ||೧೫||

ಆಚಾರ್ಯರ ಬುದ್ಧಿಯು ವಿಚಾರಮಾಡುತ್ತ ಮುಂದೆ ಮುಂದೆ ಹೋಗಿ ಯಾವ ತತ್ತ್ವವನ್ನು ಚೆನ್ನಾಗಿ ನೋಡಿತೊ ಆ ವೈದಿಕತತ್ತ್ವವನ್ನು ಮೀರಿ ಅದರಾಚೆ ನೋಡಲು ಸಮರ್ಥರಾದ ಪಂಡಿತರಾರೂ ಈ ಲೋಕದಲ್ಲಿಲ್ಲ.

ಸ್ತೋತ್ರಮಿದಂ ಮಾಲ್ಯನಿಭಂ ಬದ್ಧಂ ನಿರ್ಗಂಧಪದಕುಸುಮೈಃ ।
ಪದಯೋರರ್ಪಿತಮೇವಂ ಹೃದ್ಯಂ ತೇ ಭವತು
ಭಕ್ತಿಮಾತ್ರಗುಣಮ್ ॥ ೧೬॥

ಹೇ ಗುರೋ! ನಿರ್ಗಂಧ ಪದಗಳೆಂಬ ಹೂಗಳಿಂದ ಕಟ್ಟಲ್ಪಟ್ಟ ಭಕ್ತಿಯೆಂಬ ಗುಣ (ದಾರ) ಮಾತ್ರವುಳ್ಳ ಮಾಲೆಯಂತಿರುವ ಈ ಸ್ತೋತ್ರವನ್ನು ನಿಮ್ಮ ಪಾದಗಳಿಗೆ ಅರ್ಪಿಸುತ್ತಿದ್ದೇನೆ. ಇದು ನಿಮ್ಮ ಹೃದಯಕ್ಕೆ ಒಪ್ಪಿಗೆಯಾಗಲಿ.

*   *   *

ವಿಮಲಹೃದಯವಾಸಂ ಮೋಕ್ಷಲಕ್ಷ್ಮೀನಿವಾಸಂ
ಶುಭಚರಿತವಿಲಾಸಂ ಮಾನವಾಕಾರಭಾಸಮ್।
ಗುರುವರಶಿವಮಂತಶ್ಚಿಂತಯನ್ ಸಂತಿತೀರ್ಷುಃ
ಕಲಯತು ಚಿರಮೇತಾಂ ವಾಙ್ಮಯೀಂ ಪುಷ್ಪಮಾಲಾಮ್ ॥

ಶ್ರೀ ಶಂಕರಗುರುಗಳು ಪರಿಶುದ್ಧವಾದ ಅಂತಃಕರಣದಲ್ಲಿ ನೆಲೆಸುವವರು. ಮೋಕ್ಷಲಕ್ಷ್ಮಿಯ ಆವಾಸಸ್ಥಾನ. ಶುದ್ಧಚರಿತ್ರದಿಂದ ಶೋಭಿಸುವವರು. ಮಾನವಾಕಾರದಲ್ಲಿ ತೋರಿಕೊಂಡವರು. ಸಂಸಾರಸಾಗರವನ್ನು ದಾಟಲು ಬಯಸುವ ಮಾನವನು ಇಂಥ ಗುರುಗಳನ್ನು ಮನಸ್ಸಿನಲ್ಲಿ ಧ್ಯಾನಿಸುತ್ತ ವಾಗ್ರೂಪವಾದ ಈ ಪುಷ್ಪಮಾಲಿಕೆಯನ್ನು ಸದಾ ಧರಿಸಲಿ.



## ಭಕ್ತ ವೃಂದದವರ ಕಾಣಿಕೆ

ರಾಜಸೇವಾಸಕ್ತ ಬೆಳ್ಳಾವೆ ವೆಂಕಟನಾರಾಯಣಪ್ಪನವರ ಪುತ್ರ
ಸಂಸ್ಕೃತ ಪಂಡಿತರು ಹಾಗು ವೇದಾಂತಿ ದಿ॥ ಬೆಳ್ಳಾವೆ ಶ್ರೀ ಶಂಕರಯ್ಯ ಮತ್ತು ಅವರ
ಧರ್ಮಪತ್ನಿ ದಿ॥ ಅಚ್ಚಮ್ಮನವರ ನೆನಪಿನಲ್ಲಿ"

*ಬೆಳ್ಳಾವೆ ಲಕ್ಷ್ಮೀನಾರಾಯಣ*



**ಗಣಪತಿ ಹೆಗ್ಡೆ**
ಗುರುಪ್ರಸಾದ್ ಕನ್‌ಸ್ಟ್ರಕ್ಷನ್ಸ್, ಬೆಂಗಳೂರು



**ಎಸ್. ಜಯಶೀಲರಾವ್**, ಹಿರಿಯ ಪತ್ರಕರ್ತ, ಬೆಂಗಳೂರು



**ಎಂ.ಎಸ್. ಪುರುಷೋತ್ತಮ್**, ವಕೀಲರು, ಬೆಂಗಳೂರು



**ಮೋಹನ್ ವಿಷ್ಣು ಹೆಗಡೆ**, ಫ್ರೆಂಡ್ಸ್ ಕಲರ್ ಲ್ಯಾಬ್, ಬೆಂಗಳೂರು

## ಭಕ್ತ ವೃಂದದವರ ಕಾಣಿಕೆ

**ಎಂ.ವಿ. ನಂದಕುಮಾರ್,** ಬಿ.ಇ. (ಮೆಕಾನಿಕ್)

**ಮೈಸೂರು ಪ್ರಿಸಿಷನ್ ಇಂಜಿನೀರ್ಸ್, ಮೈಸೂರು**



**ಹೆಚ್.ಸಿ. ಅನಂತರಾಮಯ್ಯ**

ಮಾಜಿ ಡೆಪ್ಯುಟಿ ಕಮಿಶನರ್ ಆಫ್ ಇನ್‌ಕಂ ಟ್ಯಾಕ್ಸ್, ಬೆಂಗಳೂರು – 560 010



**ಭಾಸ್ಕರ ಸತ್ಯನಾರಾಯಣ ಭಟ್ಟ,** ಕಲ್ಲಬ್ಬೆ ಕುಮುಟ



**ಎಂ.ವಿ.ಕೆ. ರಾಜು,** ಬೆಂಗಳೂರು



**ಶ್ರೀ ಟಿ.ಎಸ್. ರಮೇಶ್,** ಚಾರ್ಟ್‌ಡರ್ಡ್ ಅಕೌಂಟೆಂಟ್, ಬೆಂಗಳೂರು



**ಎನ್.ಎಸ್. ಹೆಗಡೆ,** ಕುಂದರಗಿ



**ಟಿ. ಜಗನ್ನಾಥರಾವ್,** ಅಸಿಸ್ಟೆಂಟ್ ಕನ್ಸರ್ವೆಟಿವ್ ಆಫ್ ಫಾರೆಸ್ಟ್ಸ್

ಮಹಾಲಕ್ಷ್ಮೀಪುರಂ, ಬೆಂಗಳೂರು – 560 086

# ಭಕ್ತ ವೃಂದದವರ ಕಾಣಿಕೆ

**ಡಾ॥ ಕೆ. ಅಕ್ಕಲರಾಜು, ನಿವೃತ್ತ ನಿರ್ದೇಶಕರು**

ಕ.ರಾ.ವಿ.ಯೋ. (ವೈದ್ಯಕೀಯ) ಸೇವೆಗಳು, ಕರ್ನಾಟಕ ಸರ್ಕಾರ



**ಶಿವಾನಂದ ಹೊಂಡದಕೇರಿ,** ಬೆಂಗಳೂರು



**ಹೆಚ್.ವಿ. ವೆಂಕಟಲಕ್ಷ್ಮಮ್ಮ,** ಗಣಗನೂರು



**ಡಾ॥ ಟಿ. ವೆಂಕಟಶಾಮಯ್ಯ,** ಆಯುರ್ವೇದ ವೈದ್ಯರು, ಬೆಂಗಳೂರು



**ಶ್ರೀಮತಿ ಜಯಾ ಮತ್ತು ಡಾ॥ ಬಿ.ವಿ. ನರಹರಿರಾವ್**

# 13, ರೇಷ್ಮೆ ನಗರ, ಹೊಸಹಳ್ಳಿ, ಗಾಣಿಗರಪಾಳ್ಯ, ಅಂಚೆ: ತಲಘಟ್ಟಪುರ, ಬೆಂಗಳೂರು – 560 062



**ಅಶೋಕ ಹೆಗಡೆ,** ಪ್ರಾಂಶುಪಾಲರು

ಚಿಗುರು (ವಿಶೇಷ ಶಿಕ್ಷಣ ಕೇಂದ್ರ), ಬೆಂಗಳೂರು. ಮೊ.: 98454 23733



ವಿದ್ವಾನ್ ನಡಹಳ್ಳಿ ರಂಗನಾಥ ಶರ್ಮಾ ಕನ್ನಡ ನಾಡಿನ ಅಪೂರ್ವ ವಿದ್ವಾಂಸರು. ಕಾವ್ಯ-ಅಧ್ಯಾತ್ಮ-ಹಲವು ಜ್ಞಾನಕ್ಷೇತ್ರಗಳು ಇವರ ಬಹುಮುಖಿ ಕಾರ್ಯಕ್ಷೇತ್ರ. ಶ್ರೀ ಶಂಕರರ ಹಲವು ಕೃತಿಗಳನ್ನು ಕನ್ನಡಕ್ಕೆ ಕೊಟ್ಟ ಶ್ರೀ ಶರ್ಮಾಜಿ ಶಂಕರರ ಬಗೆಗೆ ಹದಿನಾರು ಶ್ಲೋಕಗಳ ಸ್ತುತಿಯೊಂದನ್ನು ರಚಿಸಿದ್ದಾರೆ. ಶ್ರೀ ಶಂಕರರ ವ್ಯಕ್ತಿಚಿತ್ರ ಇಲ್ಲಿ ಚೆಲುವಾಗಿ ಮೂಡಿಬಂದಿದೆ. ಶ್ರೀ ಶಂಕರರ 'ದಶಶ್ಲೋಕ'ವೂ ಜತೆಗೂಡಿ ನಿಂತಿದೆ. ಶ್ರೀ ಶಂಕರರು ಕನ್ನಡದ ಕನ್ನಡಿಯಾಗಿ ಇಲ್ಲಿ ಮೂಡಿ ಬಂದಿದ್ದಾರೆ. ಶ್ರೀ ಶಂಕರರು ಕನ್ನಡ ರೂಪ ತಾಳಿ ಆಧ್ಯಾತ್ಮ ಬಂಧುಗಳ ಎದುರು ಆಶೀರ್ವಾದಮುಖವಾಗಿ ನಿಂತಿರುವುದು ಕನ್ನಡದ ಪುಣ್ಯ! ಆಧ್ಯಾತ್ಮ ಬಂಧುಗಳು ಅದ್ವೈತಾಮೃತ ಪಾನ ಮಾಡಲೆಂದು ನಾವು ಆಶಿಸುತ್ತೇವೆ.

– ಪ್ರಕಾಶಕ